┐·&╬éΔ»7|=\◎‖Üσ╔¶┬≥ ˜;_╪╟xê╧τ⁞a→]]┬·Φ&α½ßdw⌈{i"H½\|>°C2wö╕Zö6╟0"¥ε6wσ♣8┼▒σ▌∩╬φ

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 698 (790) |
| ಸದಸ್ಯರ ಹೆಸರು | : | ಶ್ರೀ ಆರ್. ಪ್ರಸನ್ನ ಕುಮಾರ್ (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 15-12-2020 |
| ಉತ್ತರಿಸುವ ಸಚಿವರು | : | ಮಾನ್ಯ ನಗರಾಭಿವೃದ್ಧಿ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಸ್ಮಾರ್ಟ್ ಸಿಟಿ ಕಂಪನಿಯ ಯೋಜನೆಯಡಿ ಬಿಡುಗಡೆಯಾದ ಅನುದಾನದಲ್ಲಿ ಯಾರ ಸಲಹೆ ಮೇರೆಗೆ ಕಾಮಗಾರಿ ಕೈಗೊಳ್ಳಲಾಗುತ್ತಿದೆ; ಸ್ಥಳೀಯ ಚುನಾಯಿತ ವಾರ್ಡ್ ಸದಸ್ಯರ ಗಮನಕ್ಕೆ ತರದೆ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತಿದೆಯೇ; ಈ ಬಗ್ಗೆ ಸ್ಥಳೀಯ ಸಂಸ್ಥೆಯ ಜೊತೆ ಚರ್ಚಿಸಲಾಗಿದೆಯೇ; (ವಿವರ ನೀಡುವುದು) | ಭಾರತ ಸರ್ಕಾರದ ನಗರಾಭಿವೃದ್ಧಿ ಮಂತ್ರಾಲಯವು, ದಿನಾಂಕ:25-06-2015ರಂದು ಸ್ಮಾರ್ಟ್ ಸಿಟಿಗಳ ಅಭಿಯಾನಕ್ಕೆ ಚಾಲನೆ ನೀಡಿರುತ್ತದೆ. ನಗರಗಳು ಸದರಿ ಅಭಿಯಾನದಡಿ ಅಭಿವೃದ್ಧಿ ಪ್ರಸ್ತಾವನೆಗಳನ್ನು ಸಿದ್ಧಪಡಿಸಿ, ಅಂತರನಗರ ಸ್ಪರ್ಧೆಯ ಮುಖಾಂತರ ಆಯ್ಕೆಯಾಗಿರುತ್ತವೆ. ಯೋಜನೆಯ ಮಾರ್ಗಸೂಚಿಗಳನುಸಾರ ಈ ಅಭಿವೃದ್ಧಿ ಪ್ರಸ್ತಾವನೆಗಳನ್ನು ಸಾರ್ವಜನಿಕ ಸಮಾಲೋಚನೆಯೊಂದಿಗೆ ಸಿದ್ಧಪಡಿಸಬೇಕಾಗಿದ್ದು, ಸ್ಪರ್ಧೆಯಲ್ಲಿ ಸಾರ್ವಜನಿಕ ಸಮಾಲೋಚನೆಗೆ 100 ರಲ್ಲಿ 16 ಅಂಕಗಳು ನಿಗಧಿಯಾಗಿರುತ್ತದೆ.<br><br>ರಾಜ್ಯದ ಎಲ್ಲಾ ನಗರಗಳು ಚುನಾಯಿತ ಪ್ರತಿನಿಧಿಗಳೊಂದಿಗೆ, ಸಾರ್ವಜನಿಕರೊಂದಿಗೆ, ವಿವಿಧ ಕ್ಷೇತ್ರಗಳಲ್ಲಿ ಪರಿಣಿತಿ ಹೊಂದಿರುವ ಸಂಘ ಸಂಸ್ಥೆಗಳು/ಶಿಕ್ಷಣ ಸಂಸ್ಥೆಗಳು ಮತ್ತು ವಿವಿಧ ಕ್ಷೇತ್ರಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ತಜ್ಞರೊಂದಿಗೆ ಹಾಗೂ ಸರ್ಕಾರೇತರ ಸಂಸ್ಥೆಗಳೊಂದಿಗೆ ಸಮಾಲೋಚಿಸಿದ ನಂತರ ಪ್ರಸ್ತಾವನೆಗಳನ್ನು ಸಿದ್ಧಪಡಿಸಿರುತ್ತವೆ. ಎಲ್ಲಾ ನಗರಗಳಲ್ಲಿ ಸಾರ್ವಜನಿಕ ಸಭೆಗಳನ್ನು ನಡೆಸಿ, ಮಾಧ್ಯಮಗಳಲ್ಲಿ ಜಾಹೀರಾತು ನೀಡಿ, ಪ್ರಬಂಧ ಸ್ಪರ್ಧೆಗಳನ್ನು ಏರ್ಪಡಿಸಿ, ಮೊಬೈಲ್ ಆಪ್‌ಗಳ ಮುಖಾಂತರ ಅಭಿಪ್ರಾಯ ಸಂಗ್ರಹಿಸಿ, ಸ್ಮಾರ್ಟ್ ಸಿಟಿ ಮೂಲ ಪ್ರಸ್ತಾವನೆಗಳನ್ನು ಸ್ಪರ್ಧೆಯ ಸಮಯದಲ್ಲಿ ತಯಾರಿಸಲಾಗಿದೆ.<br><br>ಮೇಲಿನಂತೆ ಸಿದ್ಧಪಡಿಸಲಾದ ಪ್ರಸ್ತಾವನೆಗಳಿಗೆ ಆಯಾ ನಗರ ಸ್ಥಳೀಯ ಸಂಸ್ಥೆಗಳ ಕೌನ್ಸಿಲ್ ಸಭೆಗಳು ಸ್ಮಾರ್ಟ್ ಸಿಟಿ ಯೋಜನೆಯಲ್ಲಿ ಕೈಗೊಳ್ಳಬೇಕಾದ ಕಾಮಗಾರಿಗಳಿಗೆ ಅನುಮೋದನೆ ನೀಡಿರುತ್ತವೆ. ಆನಂತರದಲ್ಲಿ ಕೇಂದ್ರ ಹಾಗೂ ರಾಜ್ಯ ಸರ್ಕಾರ ಸಹಾ ಪ್ರಸ್ತಾವನೆಗಳನ್ನು ಅನುಮೋದಿಸಿರುತ್ತದೆ.<br><br>ಮುಂದುವರೆದು, ಎಲ್ಲಾ ನಗರಗಳಲ್ಲಿ ಮಾನ್ಯ ಲೋಕಸಭಾ ಸದಸ್ಯರು, ವಿಧಾನ ಸಭಾ ಸದಸ್ಯರು, ಪೂಜ್ಯ ಮಹಾಪೌರರು, ಜಿಲ್ಲಾಧಿಕಾರಿಗಳು, |

| | | |
|---|---|---|
| | | ವ್ಯವಸ್ಥಾಪಕ ನಿರ್ದೇಶಕರು ಸ್ಮಾರ್ಟ್ ಸಿಟಿ ಲಿಮಿಟೆಡ್, ತಾಂತ್ರಿಕ ತಜ್ಞರು, ವಾಣಿಜ್ಯ ಮಂಡಳಿಯ ಸದಸ್ಯರು, ಸ್ವಯಂ ಸೇವಾ ಸಂಸ್ಥೆ ಸದಸ್ಯರು ಹಾಗೂ ಇತರೆ ಸಂಸ್ಥೆಗಳ ಪ್ರತಿನಿಧಿಗಳನ್ನು ಒಳಗೊಂಡಿರುವ "ನಗರ ಮಟ್ಟದ ಸಲಹಾ ಸಮಿತಿ" (City Level Advisory Form) ಗಳನ್ನು ರಚಿಸಲಾಗಿದ್ದು, ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ಹಾಗೂ ಅನುಷ್ಠಾನಗೊಳಿಸಲು, ಈ CLAF ಸಮಿತಿಯ ಮಾರ್ಗದರ್ಶನ ನೀಡುತ್ತಿದೆ.<br><br>ಅಲ್ಲದೇ, ಮಾನ್ಯ ನಗರಾಭಿವೃದ್ಧಿ ಸಚಿವರ ಅಧ್ಯಕ್ಷತೆಯಲ್ಲಿ ವಿಶೇಷ ಉದ್ದೇಶಿತ ವಾಹನಗಳ ಮೇಲ್ವಿಚಾರಣೆ ಮತ್ತು ಮಾರ್ಗದರ್ಶನಕ್ಕಾಗಿ ಪ್ರತಿ ನಗರದಲ್ಲಿ "ಸ್ಮಾರ್ಟ್ ಸಿಟಿ ಅನುಷ್ಠಾನ ಮತ್ತು ಪರಿಶೀಲನಾ ಸಮಿತಿಯನ್ನು" ರಚಿಸಲಾಗಿದೆ. ಈ ಸಮಿತಿಯಲ್ಲಿ ಮಾನ್ಯ ಜಿಲ್ಲಾ ಉಸ್ತುವಾರಿ ಸಚಿವರು ಸಹ-ಅಧ್ಯಕ್ಷರಾಗಿದ್ದು, ಸಂಸತ್ ಸದಸ್ಯರು, ರಾಜ್ಯ ವಿಧಾನ ಸಭಾ ಸದಸ್ಯರು, ಮಹಾ ಪೌರರು, ಜಿಲ್ಲಾಧಿಕಾರಿಗಳು, ಮಹಾನಗರ ಪಾಲಿಕೆಯ ವಿರೋಧ ಪಕ್ಷದ ನಾಯಕರು, ಅಧ್ಯಕ್ಷರು ನಗರಾಭಿವೃದ್ಧಿ ಪ್ರಾಧಿಕಾರ, ಆಯುಕ್ತರು-ಮಹಾನಗರ ಪಾಲಿಕೆ, ಆಯಕ್ತರು-ನಗರಾಭಿವೃದ್ಧಿ ಪ್ರಾಧಿಕಾರ ಇವರು ಸದಸ್ಯರುಗಳಾಗಿದ್ದು, ಆಯಾಯ ನಗರದ ಸ್ಮಾರ್ಟ್ ಸಿಟಿ ಲಿಮಿಟೆಡ್‌ನ ವ್ಯವಸ್ಥಾಪಕ ನಿರ್ದೇಶಕರು ಸದಸ್ಯ ಸಂಚಾಲಕರಾಗಿರುತ್ತಾರೆ.<br><br>ಯೋಜನಾ ಅನುಷ್ಠಾನದಲ್ಲಿ ಎದುರಾಗುವ ಅನೇಕ ಸಮಸ್ಯೆಗಳಿಗೆ 'ಸ್ಮಾರ್ಟ್ ಸಿಟಿ ಆಡ್ವೈಸರಿ ಫೋರಂ' ಮತ್ತು 'ಸ್ಮಾರ್ಟ್ ಸಿಟಿ ಅನುಷ್ಠಾನ ಮತ್ತು ಪರಿಶೀಲನಾ ಸಮಿತಿಗಳಲ್ಲಿ' ಚರ್ಚಿಸಿ ಸಮಸ್ಯೆಗಳನ್ನು ಬಗೆಹರಿಸಲಾಗುತ್ತಿದೆ. |
| ಆ | ಸ್ಮಾರ್ಟ್ ಸಿಟಿ ಕಂಪನಿಯ ಆಡಳಿತ ವ್ಯವಸ್ಥೆಗೆ ಒಂದು ಕಂಪನಿಗೆ ತಿಂಗಳೊಂದಕ್ಕೆ ತಗಲುವ ವೆಚ್ಚವೆಷ್ಟು; (ವಿವರ ನೀಡುವುದು) | ಸ್ಮಾರ್ಟ್ ಸಿಟಿ ಕಂಪನಿಗಳ ಆಡಳಿತಾತ್ಮಕ ವೆಚ್ಚಗಳು ಆಯಾ ಕಂಪನಿ ಸಿಬ್ಬಂದಿಗಳ ಸಂಖ್ಯೆ, ಕಛೇರಿ ಕಟ್ಟಡಗಳ ಬಾಡಿಗೆ, ಯೋಜನಾ ಸಮಾಲೋಚಕರ ವೆಚ್ಚ ಹೀಗೆ ಹಲವಾರು ಅಂಶಗಳ ಮೇಲೆ ನಿರ್ಧಾರವಾಗಿರುತ್ತದೆ.<br><br>ಆಯಾ ಸ್ಮಾರ್ಟ್ ಸಿಟಿ ಕಂಪನಿಗಳು ಸ್ಥಾಪನೆಯಾದ ದಿನಾಂಕದಿಂದ ಇಲ್ಲಿಯವರೆಗೆ (ನವೆಂಬರ್-2020ರ ಅಂತ್ಯಕ್ಕೆ) ಎಲ್ಲಾ 7 ಸ್ಮಾರ್ಟ್ ಸಿಟಿಗಳಿಂದ ಆದ ಒಟ್ಟು ಆಡಳಿತಾತ್ಮಕ ವೆಚ್ಚವು ರೂ.113.00 ಕೋಟಿ ಆಗಿರುತ್ತದೆ.<br><br>ಇದರ ಅನುಸಾರ ಪ್ರತಿ ವಿಶೇಷ ಉದ್ದೇಶಿತ ವಾಹನದ ಆಡಳಿತ ವ್ಯವಸ್ಥೆಗೆ ಸರಾಸರಿ ಮಾಹೆಯಾನ ಅಂದಾಜು ರೂ.35.00 ಲಕ್ಷ ವೆಚ್ಚವಾಗುತ್ತಿರುವುದು ಕಂಡುಬಂದಿರುತ್ತದೆ. |

| | | |
|---|---|---|
| ಇ | ಸ್ಮಾರ್ಟ್ ಸಿಟಿಯಲ್ಲಿ ಕೈಗೊಳ್ಳುವ ಕಾಮಗಾರಿಗೂ ಮತ್ತು ಸ್ಥಳೀಯ ಆಡಳಿತ ಸಂಸ್ಥೆಗೂ ಸಂಬಂಧ ಇಲ್ಲವೆಂಬ ದೂರುಗಳಿದ್ದು, ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು? | ಸ್ಮಾರ್ಟ್ ಸಿಟಿ ಯೋಜನೆಗಳನ್ನು ಅನುಷ್ಠಾನಗೊಳಿಸಲು ಸ್ಥಾಪಿಸಲಾಗಿರುವ ವಿಶೇಷ ಉದ್ದೇಶಿತ ವಾಹನಗಳ (ಎಸ್.ಪಿ.ವಿ) ನಿರ್ದೇಶಕರ ಮಂಡಳಿಯಲ್ಲಿ ಆಯಾ ನಗರ ಸ್ಥಳೀಯ ಸಂಸ್ಥೆಗಳ ಮಹಾಪೌರರು, ಆಯುಕ್ತರು ಒಳಗೊಂಡಂತೆ ಕೌನ್ಸಿಲ್ ಸಭೆಯಿಂದ ಆರು (6) ನಾಮ ನಿರ್ದೇಶನಗೊಂಡ ಸದಸ್ಯರಿರುತ್ತಾರೆ. ಈ ಹಿನ್ನಲೆಯಲ್ಲಿ ಎಸ್.ಪಿ.ವಿ ಮತ್ತು ನಗರ ಸ್ಥಳೀಯ ಸಂಸ್ಥೆಗಳಿಗೆ ಸಂಬಂಧ ಇಲ್ಲವೆಂಬ ದೂರು ನಿರಾಧಾರವಾಗಿರುತ್ತದೆ. ಕಾಮಗಾರಿಗಳ ಸಮರ್ಪಕ ಅನುಷ್ಠಾನಕ್ಕೆ ಆಯಾ ನಗರಗಳಲ್ಲಿ ಕೈಗೊಳ್ಳಲಾಗುತ್ತಿರುವ ಕಾಮಗಾರಿಗಳ ಅಡೆತಡೆಗಳನ್ನು ನಿವಾರಿಸಲು ಜಿಲ್ಲಾಧಿಕಾರಿಗಳು ಸಮನ್ವಯ ಸಭೆಗಳನ್ನು ಕೈಗೊಳ್ಳುತ್ತಿದ್ದು, ಅಂತಹ ಸಭೆಗಳಲ್ಲಿ ಸ್ಥಳೀಯ ಸಂಸ್ಥೆಯ ಮುಖ್ಯಸ್ಥರು ಭಾಗವಹಿಸಿ ಸಮಸ್ಯೆಗಳ ಇತ್ಯರ್ಥಕ್ಕೆ ಸಹಕರಿಸುತ್ತಾರೆ. |

ಸಂಖ್ಯೆ:ನಅಇ 332 ಸಿಎಸ್ಎಸ್ 2020

**(ಬಿ.ಎ.ಬಸವರಾಜ)**
ನಗರಾಭಿವೃದ್ಧಿ ಸಚಿವರು